ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತನೆಯ ಅಧಿವೇಶನ
ಬುಧವಾರ, ದಿನಾಂಕ : 11 ನೇ ಮಾರ್ಚ್, 2020

ವಸತಿ ಯೋಜನೆಗಳಡಿ ಹಂಚಿಕೆಯಾಗಿರುವ ಮನೆಗಳ ಕುರಿತು

ಶ್ರೀ ಎಂ.ಎ. ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

589 (824) ಮಾನ್ಯ ವಸತಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ವಸತಿ ಇಲಾಖೆಯಿಂದ ವಿವಿಧ ಯೋಜನೆಗಳಡಿ ಹಾಸನ ಜಿಲ್ಲೆಗೆ ಕಳೆದ 3 ವರ್ಷಗಳಲ್ಲಿ ಹಂಚಿಕೆಯಾದ ಮನೆಗಳೆಷ್ಟು ; ಈ ಮನೆಗಳನ್ನು ಪಡೆದಿರುವ ಫಲಾನುಭವಿಗಳ ಹೆಸರು, ಗ್ರಾಮ, ಹೋಬಳಿ, ತಾಲ್ಲೂಕು ಮತ್ತು ಜಾತಿವಾರು ವಿವರ ನೀಡುವುದು;

(ಆ) ಹಂಚಿಕೆಯಾಗಿರುವ ಮನೆಗಳಿಗೆ ಜನವರಿ-2020ರವರೆಗೆ ಬಿಡುಗಡೆಯಾಗಿರುವ ಅನುದಾನವೆಷ್ಟು ; ಖರ್ಚಾಗಿರುವ ಅನುದಾನವೆಷ್ಟು; ಅನುದಾನ ಮಂಜೂರಾಗದೇ ಬಾಕಿ ಉಳಿದಿರುವ ಅನುದಾನವೆಷ್ಟು; (ಫಲಾನುಭವಿವಾರು ಹೆಸರು, ಗ್ರಾಮ, ಹೋಬಳಿ, ತಾಲ್ಲೂಕು ಮತ್ತು ಜಾತಿವಾರು ವಿವರ ನೀಡುವುದು)

(ಇ) ಹಾಸನ ಜಿಲ್ಲೆಯಲ್ಲಿರುವ ನಿರ್ವಸತಿಕರ ಸಂಖ್ಯೆ ಎಷ್ಟು ; ಈ ನಿರ್ವಸತಿಕರಿಗೆ ಯಾವ ಕಾಲಮಿತಿಯೊಳಗೆ ವಸತಿ ಕಲ್ಪಿಸಲಾಗುವುದು? (ನಿರ್ವಸತಿಕಾರರ ಹೆಸರು, ಗ್ರಾಮ ಹೋಬಳಿ, ತಾಲ್ಲೂಕು ಮತ್ತು ಜಾತಿವಾರು ವಿವರ ನೀಡುವುದು)